


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 15-03-2021 ಪ್ರಶ್ನೆ ಸಂಖ್ಯೆ : 987(1346)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕಾಂತರಾಜ್(ಬಿಎಂಎಲ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 15-03-2021

ಉತ್ತರಿಸುವ ಸಚಿವರು: ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

ವಿಷಯ : ಜೈವಿಕ, ಮಾಹಿತಿ ತಂತ್ರಜ್ಞಾನ ಇಲಾಖೆಯಡಿ ನೋಂದಣಿಯಾದ ಉದ್ಯಮಗಳ ಬಗ್ಗೆ

(ಅ) ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವ್ಯಾಪ್ತಿಯಡಿ ಹಾಲಿ ಸ್ಥಾಪಿತವಾಗಿರುವ ಸರ್ಕಾರಿ ಹಾಗೂ ಖಾಸಗಿ ಸಂಸ್ಥೆ/ಉದ್ಯಮಗಳು ಯಾವುವು; (ಉದ್ಯಮದ ಹೆಸರು, ಸ್ಥಾಪನೆಗೊಂಡ ವರ್ಷ, ಉದ್ಯಮದ ವಿಳಾಸ, ವಿವರದೊಂದಿಗೆ ಜಿಲ್ಲಾವಾರು ಮಾಹಿತಿ ನೀಡುವುದು;

(ಆ) ಈ 3 ಇಲಾಖೆಗಳಡಿ ಅನುದಾನ ಪಡೆದ ಸರ್ಕಾರಿ ಹಾಗೂ ಖಾಸಗಿ ಸಂಸ್ಥೆ/ಉದ್ಯಮಗಳು ಯಾವುವು; ಇವುಗಳಲ್ಲಿ ಎಷ್ಟು ಸ್ಥಳೀಯ ಕನ್ನಡಿಗರಿಗೆ ಕೆಲಸ ನೀಡಲಾಗಿರುತ್ತದೆ; (ಪಡೆದ ಅನುದಾನದ ವಿವರದೊಂದಿಗೆ, ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು)

(ಇ) ಈ ಉದ್ಯಮಗಳು ಸಾಮಾಜಿಕ ಹೊಣೆಗಾರಿಕೆ ನಿಧಿಯಡಿ ಎಷ್ಟು ಅನುದಾನವನ್ನು ಮೀಸಲಿಟ್ಟಿವೆ; ಹಾಗೂ ಎಷ್ಟು ಹಣ ಖರ್ಚು ಮಾಡಿವೆ? (ವಿವರವಾದ ಮಾಹಿತಿ ನೀಡುವುದು)